# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 362

2) ಸದಸ್ಯರ ಹೆಸರು ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು)

3) ಉತ್ತರಿಸಬೇಕಾದ ದಿನಾಂಕ 03-02-2021

4) ಉತ್ತರಿಸಬೇಕಾದ ಸಚಿವರು ಮಾನ್ಯ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಉತ್ತರ ಕರ್ನಾಟಕ ಭಾಗದಲ್ಲಿ ಮೀನು ಸಾಗಾಣಿಕೆ ಮತ್ತು ಸಂಸ್ಕರಣೆಗಳಿಗೆ ಸಾಕಷ್ಟು ಅನುಕೂಲಕರವಾದ ವಾತಾವರಣ ಹಾಗೂ ಜಲಸಂಪನ್ಮೂಲ ವಿದ್ದರೂ ಅದರ ಅಭಿವೃದ್ಧಿಗೆ ಸರ್ಕಾರ ಗಮನಹರಿಸದಿರಲು ಕಾರಣವೇನು; | ಉತ್ತರ ಕರ್ನಾಟಕ ಭಾಗದಲ್ಲಿ ಹಲವಾರು ಜಲಸಂಪನ್ಮೂಲಗಳು ಇದ್ದು ಮೀನುಗಾರಿಕೆ ಅಭಿವೃದ್ಧಿಗೆ ಉತ್ತಮ ವಾತಾವರಣ ಹಾಗೂ ವಿಪುಲ ಅವಕಾಶಗಳು ಇದೆ. ಈ ನಿಟ್ಟಿನಲ್ಲಿ 2017-18 ನೇ ಸಾಲಿನಲ್ಲಿ ಉತ್ತರ ಕರ್ನಾಟಕದಲ್ಲಿ **ನಿಜಶರಣ ಶ್ರೀ ಅಂಬಿಗರ ಚೌಡಯ್ಯ ಒಳನಾಡು ಮೀನುಗಾರಿಕೆ ಅಭಿವೃದ್ಧಿ ಕೇಂದ್ರ, ಬಾಗಲಕೋಟೆ ಯಲ್ಲಿ ಸ್ಥಾಪನೆಯಾಗಿದ್ದು, ಈ ಪ್ರದೇಶದ ಮೀನುಗಾರಿಕೆ ಅಭಿವೃದ್ಧಿ ಕ್ರಮಕೈಗೊಳ್ಳಲಾಗಿದೆ.**<br><br>ಜಲಾಶಯ ಮೀನುಗಾರಿಕೆ ಅಭಿವೃದ್ಧಿ ಯೋಜನೆಯಡಿ 14 ಜಲಾಶಯಗಳಿಗೆ 67 ಲಕ್ಷ ಮೀನುಮರಿಗಳನ್ನು ದಾಸ್ತಾನು ಮಾಡಲಾಗಿದೆ. ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ ಯೋಜನೆಯಡಿ ಮೀನುಗಾರರ ಸಹಕಾರ ಸಂಘಗಳು ಗುತ್ತಿಗೆ ಪಡೆದ 148 ಕೆರೆಗಳಿಗೆ 87 ಲಕ್ಷ ಮೀನುಮರಿಗಳನ್ನು ದಾಸ್ತಾನು ಮಾಡಲಾಗಿದೆ. ಮತ್ಸ್ಯಕೃಷಿ ಆಶಾಕಿರಣ ಯೋಜನೆಯಡಿ ಕೆರೆಗಳಲ್ಲಿ ಮೀನು ಉತ್ಪಾದನೆ ಹೆಚ್ಚು ಮಾಡಲು ರೂ.16.50 ಲಕ್ಷ ಸಹಾಯಧನ ನೀಡಲಾಗಿದೆ. ಜಲಾಶಯಗಳಲ್ಲಿ ಸೀಗಡಿ ಮೀನು ಕೃಷಿ ಅಭಿವೃದ್ಧಿಪಡಿಸಲು 4 ಜಲಾಶಯಗಳಿಗೆ 6.60 ಲಕ್ಷ ಸಿಹಿನೀರು ಸೀಗಡಿ ಮೀನುಮರಿಗಳನ್ನು ದಾಸ್ತಾನು ಮಾಡಲಾಗಿದೆ. ಪ್ರಧಾನಮಂತ್ರಿ ಮತ್ಸ್ಯಸಂಪದ ಯೋಜನೆಯಡಿ ಮೀನು ಕೆಡದಂತೆ ಸಾಗಾಣಿಕೆ ಮಾಡಲು ಹಾಗೂ ಸಂಸ್ಕರಣೆಗಾಗಿ ಮಂಜುಗಡ್ಡೆ ಲಭ್ಯತೆಗಾಗಿ ಮಂಜುಗಡ್ಡೆ ಘಟಕವನ್ನು ಯಾದಗಿರಿ ಜಿಲ್ಲೆಯಲ್ಲಿ ಸ್ಥಾಪಿಸಲಾಗಿದೆ. ಪ್ರಧಾನಮಂತ್ರಿ ಮತ್ಸ್ಯಸಂಪದ ಯೋಜನೆಯಡಿ-ಸಮಗ್ರ ಮೀನುಗಾರಿಕೆ ಅಭಿವೃದ್ಧಿ ಯೋಜನೆಯಡಿ ಅರ್ಹ ಮೀನುಗಾರರಿಗೆ / ಮೀನು ಕೃಷಿಕರಿಗೆ ಮೀನು ಸಾಗಾಣಿಕೆಗಾಗಿ ಘಟಕ ವೆಚ್ಚ ರೂ.0.60 ಲಕ್ಷದಂತೆ, ತ್ರಿಚಕ್ರ ವಾಹನದೊಂದಿಗೆ ಐಸ್ ಬಾಕ್ಸ್ ಖರೀದಿಸಲು ಘಟಕ ವೆಚ್ಚ ರೂ.2.00 ಲಕ್ಷದಂತೆ ಹಾಗೂ ಗಿರಿಜನ ಉಪಯೋಜನೆಯಡಿ ಘಟಕ ವೆಚ್ಚ ರೂ.7.00 ಲಕ್ಷದಲ್ಲಿ ಮೀನು ಸಾಗಾಣಿಕೆಗಾಗಿ ನಾಲ್ಕು ಚಕ್ರ ವಾಹನ ಖರೀದಿಸಲು ನೆರವು ನೀಡಲಾಗುತ್ತಿದೆ. |

| | | |
|---|---|---|
| | | ರಾಜ್ಯ ವಲಯ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆಯಡಿ ಉತ್ತರ ಕರ್ನಾಟಕ ಜಿಲ್ಲೆಗಳಿಗೆ ದ್ವಿಚಕ್ರ ವಾಹನಕ್ಕೆ ರೂ.0.35 ಲಕ್ಷ ಹಾಗೂ ನಾಲ್ಕು ಚಕ್ರ ವಾಹನಕ್ಕೆ ರೂ.4.90 ಲಕ್ಷಗಳ ಸಹಾಯಧನವನ್ನು ನೀಡಲಾಗುತ್ತಿದೆ. ಈ ಜಿಲ್ಲೆಗಳಿಗೆ ಸದರಿ ಯೋಜನೆಗಳಡಿ 16 ದ್ವಿಚಕ್ರ ವಾಹನ ಮತ್ತು 02 ನಾಲ್ಕು ಚಕ್ರ ವಾಹನಗಳನ್ನು ಖರೀದಿಸುವ ಗುರಿ ನಿಗದಿಪಡಿಸಲಾಗಿದೆ.<br><br>ಜಿಲ್ಲಾ ವಲಯ ಯೋಜನೆಯಾದ ಮತ್ಸ್ಯವಾಹಿನಿಯಲ್ಲಿ ಮೀನು ಮಾರಾಟಕ್ಕೆ ದ್ವಿಚಕ್ರ / ತ್ರಿಚಕ್ರ ವಾಹನವನ್ನು ಖರೀದಿಸಲು ಸಹಾಯಧನ ನೀಡಲಾಗುತ್ತಿದೆ. |
| ಆ) | "ಕರ್ನಾಟಕ ಮತ್ಸ್ಯ ವಿಕಾಸ ಯೋಜನೆ" ಯಡಿಯಲ್ಲಿ ಮೀನುಗಾರಿಕಾ ತಾಂತ್ರಿಕತೆಯನ್ನು ಪ್ರೋತ್ಸಾಹಿಸಲು ಸರ್ಕಾರ ಯೋಜನೆ ಹಾಕಿಕೊಂಡಿದೆಯೇ; | ಮೀನುಗಾರಿಕೆ ಅಭಿವೃದ್ಧಿಗೆ ಮೀನು ಕೃಷಿಕರು ಆಧುನಿಕ ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳಲು ಉತ್ತೇಜಿಸುವ ಉದ್ದೇಶದಿಂದ 2020-21ನೇ ಸಾಲಿನಲ್ಲಿ **"ಕರ್ನಾಟಕ ಮತ್ಸ್ಯ ವಿಕಾಸ"** ಎಂಬ ಹೊಸ ಕಾರ್ಯಕ್ರಮವನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದ್ದು, 2020-21ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ-62ರಲ್ಲಿ "ಕರ್ನಾಟಕ ಮತ್ಸ್ಯವಿಕಾಸ" ಯೋಜನೆಯನ್ನು ಜಾರಿಗೆ ತರಲಾಗುವುದು ಎಂದು ಘೋಷಿಸಲಾಗಿದೆ. ಕೋವಿಡ್-19 ಹಿನ್ನೆಲೆಯಲ್ಲಿ ಈ ಹೊಸ ಯೋಜನೆಯನ್ನು 2020-21ನೇ ಸಾಲಿನಲ್ಲಿ ಅನುಷ್ಠಾನಗೊಳಿಸಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಈ ಯೋಜನೆಯಡಿಯಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿ ಯಾವ ಯಾವ ಸ್ಥಳಗಳಲ್ಲಿ ಜಾರಿಗೆ ತರಲು ಯೋಚಿಸಲಾಗಿದೆ; | ಅನ್ವಯಿಸುವುದಿಲ್ಲ. |
| ಈ) | ಈ ಯೋಜನೆಯ ಅನುಷ್ಠಾನಕ್ಕಾಗಿ ಮೀಸಲಿಟ್ಟ ಹಣವೆಷ್ಟು? | ಅನ್ವಯಿಸುವುದಿಲ್ಲ. |

ಸಂಖ್ಯೆ: ಪಸಂಮೀ ಇ-42 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು